# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 840 |
| ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 20-09-2021. |
| ಉತ್ತರಿಸುವ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು |

| ಪ್ರಶ್ನೆ | ಉತ್ತರ |
|---|---|
| (ಅ) I ರಿಂದ 10ನೇ ತರಗತಿವರೆಗಿನ 2020-21ರ ಶೈಕ್ಷಣಿಕ ವರ್ಷವು ಆರಂಭವಾದರೂ ಇದುವರೆಗೂ ವಿದ್ಯಾರ್ಥಿಗಳಿಗೆ ಪುಸ್ತಕಗಳು ದೊರೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಿಂದ ಆನ್‌ಲೈನ್ ತರಗತಿಗಳಿಗೆ ಹಾಜರಾಗುತ್ತಿರುವ ವಿದ್ಯಾರ್ಥಿಗಳಿಗೆ ಆಗುತ್ತಿರುವ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ಯಾವ ಕ್ರಮಕೈಗೊಂಡಿದೆ | ಹೌದು.<br>ದಿನಾಂಕ:15.09.2021 ರಲ್ಲಿದ್ದಂತೆ ಶೇ. 85.08 ರಷ್ಟು, 440,94,158 ಪಠ್ಯ ಪುಸ್ತಕಗಳನ್ನು ಈಗಾಗಲೇ ಸರಬರಾಜು ಮಾಡಲಾಗಿದೆ.<br>ಆನ್‌ಲೈನ್ ತರಗತಿಗಳಿಗೆ ಹಾಜರಾಗುತ್ತಿರುವ ವಿದ್ಯಾರ್ಥಿಗಳಿಗೆ ಆಗುತ್ತಿರುವ ಸಮಸ್ಯೆಗಳನ್ನು ಬಗೆಹರಿಸಲು ದಿನಾಂಕ:20.09.2021 ರೊಳಗೆ ಶೇ. 100 ರಷ್ಟು ಪುಸ್ತಕಗಳು ಶಾಲೆಗಳಿಗೆ ಸರಬರಾಜು ಮಾಡಲು ತುರ್ತು ಕ್ರಮ ವಹಿಸಲಾಗುತ್ತಿದೆ. |
| (ಆ)<br>ರಾಜ್ಯದಲ್ಲಿ ಎಷ್ಟು ಮಕ್ಕಳಿಗೆ 2021-22 ಶೈಕ್ಷಣಿಕ ಸಾಲಿನಲ್ಲಿ ಯುನಿಫಾರ್ಮ್, ಶೂ, ಸಾಕ್ಸ್ ನೀಡಲಾಗಿದೆ | 2021-22ನೇ ಸಾಲಿಗೆ 2020-21ನೇ ಸಾಲಿನ ಸ್ಯಾಟ್ಸ್ ಮಕ್ಕಳ ಸಂಖ್ಯೆ ಆಧರಿಸಿ ಒಟ್ಟು 43.92 ಲಕ್ಷ ಮಕ್ಕಳಿಗೆ ಸಮವಸ್ತ್ರ ಸರಬರಾಜು ಮಾಡುವ ಕಾರ್ಯ ಪ್ರಗತಿಯಲ್ಲಿದೆ.<br>2021-22 ನೇ ಸಾಲಿನಲ್ಲಿ ಶೂ ಮತ್ತು ಸಾಕ್ಸ್ ವಿತರಣೆಗೆ ಕೋವಿಡ್-19ರ ಕಾರಣದಿಂದ ಅನುದಾನ ಬಿಡುಗಡೆಯಾಗಿರುವುದಿಲ್ಲ. |
| ಭೌತಿಕ ತರಗತಿಗಳನ್ನು ಪ್ರಾರಂಭಿಸಲು ಸರಕಾರ ನಿರ್ಧರಿಸಿದೆಯೇ; | ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಿದಂತೆ 6 ರಿಂದ 10 ನೇ ತರಗತಿಯವರೆಗೆ ಭೌತಿಕ ತರಗತಿಗಳನ್ನು ಪ್ರಾರಂಭಿಸಲಾಗಿದೆ. I ರಿಂದ 5ನೇ ತರಗತಿಗಳನ್ನು ಪ್ರಾರಂಭಿಸುವ ಬಗ್ಗೆ ಪರಿಸ್ಥಿತಿ ಅವಲೋಕಿಸಿ ನಂತರ ನಿರ್ಧರಿಸಲಾಗುವುದು |
| ಮಕ್ಕಳಿಗೆ ಇದುವರೆವಿಗೂ ಕೋವಿಡ್ ವ್ಯಾಕ್ಸಿನ್ ನೀಡದಿರುವುದರಿಂದ ಭೌತಿಕ ತರಗತಿಗಳನ್ನು ಆರಂಭಿಸಿದಾಗ ಕೋವಿಡ್-19 ನಿಂದ ಸಣ್ಣ ಮಕ್ಕಳಿಗೆ ಅಪಾಯವಾಗದಂತೆ ಯಾವ ಕ್ರಮ ಕೈಗೊಳ್ಳಲಾಗಿದೆ. | ಶಾಲೆಗಳಲ್ಲಿ ವಿದ್ಯಾರ್ಥಿಗಳ ಭೌತಿಕ ಹಾಜರಾತಿಯು ಕಡ್ಡಾಯವಾಗಿರುವುದಿಲ್ಲ. ಶಾಲೆಗೆ ಹಾಜರಾಗಲು ಬಯಸದೇ ಇರುವ ವಿದ್ಯಾರ್ಥಿಗಳಿಗೆ ಈಗ ಅನುಸರಿಸುತ್ತಿರುವ ಆನ್‌ಲೈನ್/ ಇತರೆ ಪರ್ಯಾಯ ವ್ಯವಸ್ಥೆಯನ್ನು ಮುಂದುವರೆಸಲು ಅವಕಾಶ ಕಲ್ಪಿಸಲಾಗಿದೆ.<br>ಪ್ರಸ್ತುತ ಪ್ರಾರಂಭವಾಗಿರುವ 6 ರಿಂದ 10ನೇ ತರಗತಿಗಳ ವಿದ್ಯಾರ್ಥಿಗಳಿಗೆ ಕೋವಿಡ್-19ರ ಸೋಂಕು/ಲಕ್ಷಣಗಳು ಕಂಡುಬಂದಲ್ಲಿ ಶಾಲಾ ಮುಂಜಾಗ್ರತಾ ಕ್ರಮವಾಗಿ ಆರೋಗ್ಯ ಇಲಾಖೆಯ ನಿರ್ದೇಶನದಂತೆ ಶಾಲೆಗಳನ್ನು ನಿಗದಿತ ಅವಧಿಗೆ ತಾತ್ಕಾಲಿಕವಾಗಿ ಮುಚ್ಚಿ ಸ್ಯಾನಿಟೈಸ್ ಮಾಡಿಸಿ ನಂತರ ಶಾಲೆಯ ಭೌತಿಕ ತರಗತಿಗಳನ್ನು ತೆರೆಯುವಂತೆ ತಿಳಿಸಲಾಗಿದೆ. |

| | |
|---|---|
| ಶಾಲೆ ಆರಂಭಿಸುವುದರಿಂದ ಕೋವಿಡ್ ಹೆಚ್ಚು ಪಸರಿಸಿದಲ್ಲಿ ಯಾರನ್ನು ಹೊಣೆಗಾರರನ್ನಾಗಿ ಮಾಡಲಾಗುವುದು | ರಾಜ್ಯದಲ್ಲಿ ಕೋವಿಡ್-19ರ ಸೋಂಕಿನ ಪ್ರಮಾಣ 2% ಗಿಂತ ಕಡಿಮೆ ಇರುವ ತಾಲ್ಲೂಕು/ವಲಯಗಳಲ್ಲಿ (ಕೇರಳ ರಾಜ್ಯದೊಡನೆ ಗಡಿ ಹಂಚಿಕೊಂಡಿರುವ ತಾಲ್ಲೂಕುಗಳನ್ನು ಹೊರತುಪಡಿಸಿ) ಆನ್‌ಲೈನ್/ಪರ್ಯಾಯ ವಿಧಾನದಲ್ಲಿ ಬೋಧನೆ ಮಾಡುವಂತೆ ಸೂಚಿಸಲಾಗಿದೆ.<br>ತಜ್ಞರ ಸಲಹೆಯಂತೆ, ಪ್ರಮಾಣಿತ ಕಾರ್ಯಚರಣೆ ವಿಧಾನ (ಎಸ್.ಓ.ಪಿ) ವನ್ನು ಕಡ್ಡಾಯವಾಗಿ ಪಾಲಿಸುವುದರ ಮೂಲಕ ಹಾಗೂ ಪಾಳಿ ಪದ್ಧತಿಯ ವೇಳಾ ಪಟ್ಟಿಯಂತೆ ಭೌತಿಕ ತರಗತಿಗಳನ್ನು ಪ್ರಾರಂಭಿಸಿದ್ದು, ವಾರದ ಕೊನೆಯ ದಿನವಾದ ಶನಿವಾರದಂದು ಶಾಲೆಯ ಸ್ಯಾನಿಟೈಜ್ ಮಾಡಿಸಿ, ಶಾಲೆಯ ಸ್ವಚ್ಛತೆಯ ಕಾರ್ಯವನ್ನು ಕೈಗೊಂಡು ಭೌತಿಕ ತರಗತಿ ನಡೆಸುವುದರಿಂದ ಮಕ್ಕಳಿಗೆ ಯಾವುದೇ ತೊಂದರೆಯಾಗದಂತೆ ಕ್ರಮವಹಿಸಲಾಗಿರುತ್ತದೆ. ಈ ಮೇಲ್ಕಂಡಂತೆ ಸುರಕ್ಷತೆ ಕ್ರಮಗಳನ್ನು ಅನುಸರಿಸುತ್ತಿರುವುದರಿಂದ ಕೋವಿಡ್ ಸೋಂಕು ಹೆಚ್ಚು ಪಸರಿಸವುದನ್ನು ತಡೆಗಟ್ಟಲಾಗಿದೆ. |
| (ಇ) ಶಾಲೆಗಳಿಗೆ ಮಕ್ಕಳಿಗೆ ಕಡ್ಡಾಯವಾಗಿ ಹಾಜರಾಗಲೇಬೇಕೆಂದು ನಿಯಮ ಮಾಡಲಾಗಿದೆಯೇ;<br><br>ಶಾಲೆಗೆ ಬರದೆ ಆನ್‌ಲೈನ್ ತರಗತಿಯ ಮೂಲಕ ವಿದ್ಯಾಭ್ಯಾಸ ಮಾಡಲು ಇಚ್ಚಿಸುವ ಮಕ್ಕಳಿಗೆ ಯಾವ ಸೌಲಭ್ಯ ನೀಡಲಾಗುತ್ತದೆ?<br><br>ಭೌತಿಕ ತರಗತಿ ಆನ್‌ಲೈನ್ ತರಗತಿಗಳಿಂದ ಶಿಕ್ಷಕರ ಮೇಲಾಗುವ ಒತ್ತಡ ನಿವಾರಣೆಗೆ ಯಾವ ಕ್ರಮ ಕೈಗೊಳ್ಳಲಾಗಿದೆ; | ಶಾಲೆಗಳಲ್ಲಿ ವಿದ್ಯಾರ್ಥಿಗಳ ಭೌತಿಕ ಹಾಜರಾತಿಯು ಕಡ್ಡಾಯವಾಗಿರುವುದಿಲ್ಲ. ಶಾಲೆಗೆ ಹಾಜರಾಗಲು ಬಯಸದೇ ಇರುವ ವಿದ್ಯಾರ್ಥಿಗಳಿಗೆ ಈಗ ಅನುಸರಿಸುತ್ತಿರುವ ಆನ್‌ಲೈನ್/ ಇತರೆ ಪರ್ಯಾಯ ವ್ಯವಸ್ಥೆಯನ್ನು ಮುಂದುವರೆಸಲು ಅವಕಾಶ ಕಲ್ಪಿಸಲಾಗಿದೆ.<br><br>ದೂರದರ್ಶನದ ಚಂದನ ವಾಹಿನಿಯಲ್ಲಿ ಪ್ರತಿ ದಿನ 1 ರಿಂದ 10ನೇ ತರಗತಿಯ ವಿದ್ಯಾರ್ಥಿ-ವಿದ್ಯಾರ್ಥಿನಿಯರುಗಳಿಗೆ **"ಸಂವೇದ"** ಎಂಬ ದೂರದರ್ಶನ ಆಧಾರಿತ ಇ-ಕಲಿಕಾ ಕಾರ್ಯಕ್ರಮವನ್ನು ಆಯೋಜಿಸಲಾಗಿದೆ.<br>ಪರ್ಯಾಯ ವಿಧಾನವಾದ ದೀಕ್ಷಾ ಆಪ್‌ನಲ್ಲಿ "ಒಂದು ದೇಶ ಒಂದು ಪೋರ್ಟಲ್" 1 ರಿಂದ 10ನೇ ತರಗತಿಯ ಸುಮಾರು 22000ಕ್ಕೂ ಹೆಚ್ಚು ಕಂಟೆಂಟ್‌ಗಳನ್ನು ಅಳವಡಿಸಲಾಗಿದೆ.<br>ಮಕ್ಕಳ ಸಹಾಯವಾಣಿಯ ಯೂಟ್ಯೂಬ್‌ನಲ್ಲಿ ವೀಡಿಯೋ ಪಾಠಗಳನ್ನು ಅಪ್‌ಲೋಡ್ ಮಾಡಲಾಗಿದೆ. ಬೋಧನಾ ತರಗತಿಯ ವಿಡಿಯೋಗಳನ್ನು ಅಪ್‌ಲೋಡ್ ಮಾಡಲಾಗಿದ್ದು, ವಿದ್ಯಾರ್ಥಿಗಳು ಇದರ ಸದುಪಯೋಗವನ್ನು ಪಡೆದುಕೊಳ್ಳುತ್ತಿದ್ದಾರೆ.<br>ರಾಜ್ಯದಲ್ಲಿ ಕೋವಿಡ್-19ರ ಸೋಂಕಿನ ಪ್ರಮಾಣ 2% ಗಿಂತ ಕಡಿಮೆ ಇರುವ ತಾಲ್ಲೂಕು/ವಲಯಗಳಲ್ಲಿ (ಕೇರಳ ರಾಜ್ಯದೊಡನೆ ಗಡಿ ಹಂಚಿಕೊಂಡಿರುವ ತಾಲ್ಲೂಕುಗಳನ್ನು ಹೊರತುಪಡಿಸಿ) ಆನ್‌ಲೈನ್/ಪರ್ಯಾಯ ವಿಧಾನದಲ್ಲಿ ಬೋಧನೆ ಮಾಡುವಂತೆ ಸೂಚಿಸಲಾಗಿದೆ.<br>ಪ್ರಸ್ತುತ ಶಿಕ್ಷಕರು ಅರ್ಧ ದಿನ ಭೌತಿಕ ತರಗತಿಗಳನ್ನು ಹಾಗೂ ಅರ್ಧ ದಿನ ಆನ್‌ಲೈನ್/ಪರ್ಯಾಯ ಶಿಕ್ಷಣ ನೀಡಲು ಬಳಸಿಕೊಳ್ಳುತ್ತಿದ್ದಾರೆ. |

| | |
|---|---|
| ಈ. ಸರಕಾರಿ ಶಾಲೆಗಳಲ್ಲಿ ಕುಡಿಯುವ ನೀರು, ಶೌಚಾಲಯ, ಆಟದ ಮೈದಾನದ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಕುರಿತು ಸರಕಾರ ಯಾವ ಕ್ರಮಗಳನ್ನು ಕೈಗೊಂಡಿವೆ? | ಹೌದು.<br>ಸರ್ಕಾರಿ ಶಾಲೆಗಳಿಗೆ ಶೌಚಾಲಯ ಮತ್ತು ಅಡುಗೆ ಕೋಣೆಗಳಿಗೆ ಕೊಳವೆ ನೀರು ಒದಗಿಸಲು ಪ್ರಧಾನಮಂತ್ರಿ ಜಲಜೀವನ್ ಅಭಿಯಾನ ಕಾರ್ಯಕ್ರಮವನ್ನು ರಾಜ್ಯ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಇಲಾಖೆ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ.<br><br>2020-21ನೇ ಸಾಲಿನಲ್ಲಿ ಶಾಲೆಗಳಿಗೆ ಅವಶ್ಯವಿರುವ ಶೌಚಾಲಯ, ಆಟದ ಮೈದಾನ, ಅಡುಗೆ ಕೋಣೆ ಮತ್ತು ಕೈತೋಟ ನಿರ್ಮಾಣಕ್ಕಾಗಿ ನರೇಗಾ ಯೋಜನೆಯಡಿಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಅನುದಾನ ಒಗ್ಗೂಡಿಸವಿಕೆಯ ಮೂಲಕ ಸೌಲಭ್ಯಗಳನ್ನು ಒದಗಿಸಲು ರೂ.2920.99ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಿದೆ.<br><br>2021-22ನೇ ಸಾಲಿನ ಆಯವ್ಯಯದಲ್ಲಿ ಶಾಲೆಗಳಿಗೆ ಅವಶ್ಯವಿರುವ ಶೌಚಾಲಯ ನಿರ್ಮಾಣ ಹಾಗೂ ದುರಸ್ತಿಗಾಗಿ ರಾಜ್ಯ ವಲಯ ಮುಂದುವರಿದ ಯೋಜನೆಯಡಿ ರೂ.35.00 ಕೋಟಿಗಳ ಅನುದಾನ ನಿಗಧಿಯಾಗಿರುತ್ತದೆ.ಅನುಷ್ಠಾನ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |

**ಇಪಿ 29 ಎಂಪಿಇ 2021.**

**(ಬಿ.ಸಿ.ನಾಗೇಶ್)**

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು**